



# ಹೊಂಗನಸು



ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ವಾರ್ತಾಪತ್ರ

ಹೊಂಗನಸು – 28

| | | | | |
|---|---|---|---|---|
| ಸಂಪುಟ: ೦೪ ಸಂಚಿಕೆ: ೨ | ಮೇ ೨೦೧೭ | ಪುಟಗಳು ೮ | ವಾರ್ಷಿಕ ಚಂದ ರೂ. ೨೦/– | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್ |
| Vol. 04 Issue 2 | May 2017 | Pages - 8 | A. Sub. - Rs. 20/- | Editor : Sri. B.R. Ravindranath |





**ಚಂದಾ ವಿವರಗಳು**

ವಾರ್ಷಿಕ ಚಂದಾ
ರೂ. ೨೦/–

ಐದು ವರ್ಷಗಳ ಚಂದಾ
ರೂ. ೧೦೦/–



ವಿಳಾಸ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಸ್ಥಾಪನೆ : ೦೬–೦೫–೧೯೭೯
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ,
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು – ೧೯
ದೂರವಾಣಿ:
೨೬೬೧೫೮೭೭, ೨೬೬೭೬೭೭೩
ಇಮೇಲ್ : bmsritrust@gmail.com
web: www.bmshri.org


## ಪದ್ಮಶ್ರೀ ನಾಡೋಜ ಪ್ರೊ. ಜಿ. ವೆಂಕಟಸುಬ್ಬಯ್ಯ ಅವರಿಗೆ ಸನ್ಮಾನ

ಹಾಗೂ

## "ವಿಶೇಷ ಅಕ್ಕರಗೊಟ್ಟಿ" ತಿಂಗಳ ಮುಕ್ತ ಸಂಸ್ಕೃತಿ ಚಿಂತನೆ

ವಿಷಯ : ಕುಮಾರವ್ಯಾಸ ಭಾರತದ ಶಲ್ಯ ಪರ್ವ, 1ನೇ ಸಂಧಿ, 25ನೇ ಪದ್ಯ.

ಚಾಲನೆ: ಪದ್ಮಶ್ರೀ ನಾಡೋಜ ಪ್ರೊ. ಜಿ. ವೆಂಕಟಸುಬ್ಬಯ್ಯ.

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಸ್ಥಾಪಕ ಸದಸ್ಯರಲ್ಲಿ ಒಬ್ಬರಾದ ಹಾಗೂ ಈ ಹಿಂದೆ ಪ್ರತಿಷ್ಠಾನದ ಅಧ್ಯಕ್ಷರೂ ಆಗಿದ್ದ ಪದ್ಮಶ್ರೀ ನಾಡೋಜ ಪ್ರೊ. ಜಿ. ವೆಂಕಟಸುಬ್ಬಯ್ಯ ಅವರಿಗೆ ಇತ್ತೀಚೆಗೆ ಪದ್ಮಶ್ರೀ ದೊರೆತು ಅಖಿಲ ಭಾರತದ ಮಟ್ಟದಲ್ಲಿ ಅವರಿಗೆ ಮನ್ನಣೆ ದೊರೆತ ಸಂದರ್ಭದಲ್ಲಿ ಅವರನ್ನು ಆತ್ಮೀಯವಾಗಿ ಸನ್ಮಾನಿಸಲಾಯಿತು. ಪ್ರೊ.ಜಿ. ವೆಂಕಟಸುಬ್ಬಯ್ಯ ಅವರು ಮೊದಲಿಗೆ ತಮಗೆ ಪದ್ಮಶ್ರೀ ಮನ್ನಣೆ ದೊರೆತ ಬಗ್ಗೆ ಸಂತಸ ವ್ಯಕ್ತಪಡಿಸಿ ಬಿ.ಎಂ.ಶ್ರೀ ಅವರ ವಿದ್ಯಾರ್ಥಿಗಳ ಪೈಕಿ ತಾವು ಒಬ್ಬರೇ ಇರುವ ಬಗ್ಗೆ ನುಡಿದರು. ನಂತರ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಕಾರ್ಯಕ್ರಮಗಳ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸಿ ಅಕ್ಕರಗೊಟ್ಟಿ ಕಾರ್ಯಕ್ರಮದ ಬಗ್ಗೆ ತಮಗೆ ವಿಶೇಷ ಆಸಕ್ತಿ ಇದೆ ಎಂದು ತಿಳಿಸಿದರು. ನಂತರ ಕುಮಾರವ್ಯಾಸ ಭಾರತದ ಶಲ್ಯ ಪರ್ವ, 1ನೇ ಸಂಧಿ, 25ನೇ ಪದ್ಯ ವನ್ನು ಓದಿ ಅದರ ವ್ಯಾಖ್ಯಾನ ಮಾಡಿದರು.

ಇದೇ ಪದ್ಯದ ಬಗ್ಗೆ ಪ್ರೊ. ಅಶ್ವತ್ಥನಾರಾಯಣ, ಪ್ರೊ.ಕಾವೆಂ ಶ್ರೀನಿವಾಸಮೂರ್ತಿ, ಪ್ರೊ.ಎಸ್.ಎಲ್ ಶ್ರೀನಿವಾಸಮೂರ್ತಿ, ಡಾ.ನಳಿನಿ ವೆಂಕಟೇಶ ಅವರುಗಳೂ ಸಹ ತಮ್ಮ ವ್ಯಾಖ್ಯಾನಗಳನ್ನು ಮಂಡಿಸಿದರು.ಈ ಕುರಿತು ನಡೆದ ಅರ್ಥಪೂರ್ಣ ಚರ್ಚೆಯಲ್ಲಿ ಡಾ. ಪಿ.ವಿ. ನಾರಾಯಣ, ಪ್ರೊ. ಅಬ್ದುಲ್ ಬಷೀರ್, ಶ್ರೀ ಸುಬ್ರಮಣ್ಯ, ಶ್ರೀರಾಮಮೂರ್ತಿ, ಡಾ॥ ಲಕ್ಷ್ಮೀನಾರಾಯಣ, ಪ್ರೊ ಶೇಷಗಿರಿರಾವ್, ಮುಂತಾದವರು ಭಾಗವಹಿಸಿದ್ದರು. ಈ ವಿಶೇಷ ಅಕ್ಕರಗೊಟ್ಟಿಯಲ್ಲಿ ಬಹಳಷ್ಟು ಆಸಕ್ತರು ಸಭಾಂಗಣದಲ್ಲಿ ಕಿಕ್ಕಿರಿದು ನೆರೆದಿದ್ದರು.

ಕಾರ್ಯಕ್ರಮದ ಆರಂಭದಲ್ಲಿ ಡಾ.ಪಿ.ವಿ.ನಾರಾಯಣ ಅವರು ಸಭೆಗೆ ಎಲ್ಲರಿಗೂ ಸ್ವಾಗತಕೋರಿದರು. ಪ್ರೊ॥ ಜಿ. ಅಬ್ದುಲ್ ಬಷೀರ್ ಅವರು ವಂದನಾರ್ಪಣೆ ಮಾಡಿದರು.






## ಸಂಪಾದಕೀಯ

ವಿಶ್ವದಾದ್ಯಂತ ಮೈ ನವಿರೇಳಿಸುವಂತಹ ಬದಲಾವಣೆಗಳು ಆಗತೊಡಗಿವೆ. ಪೆಟ್ರೋಲಿಯಂ ತೈಲದ ಬೆಲೆಯ ಇಳಿಕೆ ಮೊದಲ ಮುನ್ಸೂಚನೆಯಷ್ಟೆ ಎಂದು ವಿಜ್ಞಾನಿಗಳು ಹಾಗೂ ನಗರ ಯೋಜಕರು ಎಚ್ಚರಿಕೆ ನೀಡುತ್ತಿದ್ದಾರೆ. ವಿದ್ಯುತ್ ಉತ್ಪಾದನೆ ಹೆಚ್ಚಾಗಿ ಮುಂದೆ ಅತಿ ಕಡಿಮೆ ದರದಲ್ಲಿ ಅಪಾರ ಪ್ರಮಾಣದಲ್ಲಿ ಲಭ್ಯಗೊಳ್ಳುವ ನಿರೀಕ್ಷೆಯಿದೆ. ಸ್ವಯಂಚಾಲಿತ ಯಂತ್ರಗಳು ಹಾಗೂ ವಾಹನಗಳು ಮತ್ತು ಕಂಪ್ಯೂಟರೀಕರಣ ಜೀವನದ ಅವಿಭಾಜ್ಯ ಅಂಗವಾಗುತ್ತವೆ. ನಮ್ಮ ಈಗಿನ ಎಲ್ಲಾ ಅಭ್ಯಾಸಗಳಲ್ಲಿ ಬಹಳಷ್ಟು ಬದಲಾವಣೆಗಳಾಗುವುದು ಖಚಿತ. ಇಂತಹ ಬದಲಾವಣೆಗಳು ನಮ್ಮ ಭಾಷೆ, ನಮ್ಮ ಪುಸ್ತಕಗಳ ಪ್ರಕಟಣೆ, ಪುಸ್ತಕ ಓದುವ ಅಭ್ಯಾಸ ಇವುಗಳ ಮೇಲೆ ಯಾವ ಪರಿಣಾಮ ಬೀರಬಹುದು ಎಂಬುದರ ಬಗ್ಗೆ ಚಿಂತನೆ ಮಾಡುವ ಕಾಲ ಸನ್ನಿಹಿತವಾಗಿದೆ.

ಹೊಂಗನಸು ಪತ್ರಿಕೆಯನ್ನು ಹೆಚ್ಚು ವರ್ಣ ರಂಜಿತ ಹಾಗೂ ಹೆಚ್ಚು ಉಪಯುಕ್ತವಾಗಿ ಮಾಡಲು ಶ್ರಮಿಸುತ್ತಿದ್ದೇವೆ. ನಿಮ್ಮ ಸಲಹೆಗಳು ಹಾಗೂ ಪ್ರತಿಕ್ರಿಯೆಗಳಿಗೆ ಸ್ವಾಗತ.

ಬಿ.ಆರ್ ರವೀಂದ್ರನಾಥ್
ಸಂಪಾದಕರು......

### ಮೇ ತಿಂಗಳಿನಲ್ಲಿ ಜನಿಸಿದ ಸಾಹಿತ್ಯೋಪಾಸಕರು

| | |
|---|---|
| ಬಿ ಪುಟ್ಟಸ್ವಾಮಯ್ಯ | 24–5–1897 |
| ಆನಕೃ | 9–5–1908 |
| ಭಾರತಿ ಸುತ (ಶಾನಭಾಗ್ ರಾಮಡು ನಾರಾಯಣರಾವ್) | 15–5–1915 |
| ಶಂಕರ ಮೊಕಾಶಿ ಪುಣೇಕರ | 8–5–1928 |

### ಮೇ ತಿಂಗಳಿನಲ್ಲಿ ನಿಧನರಾದ ಸಾಹಿತ್ಯೋಪಾಸಕರು

| | |
|---|---|
| ಕಡೆಂಗೊಡ್ಲುಶಂಕರಭಟ್ಟ | 17–5–1968 |
| ಡಿವಿಎಲ್ ನರಸಿಂಹಚಾರ್ಯ | 8–5–1971 |

## ಆಧುನಿಕ ವಚನಗಳು

–ಜಿ. ಅಬ್ದುಲ್ ಬಷೀರ್

ಜನತೆಯ ಕೃತಿಮತಿಯಲ್ಲಿ
ಜೀವನದ ಗತಿಯಲ್ಲಿ
ಕರುಣ ವಿಹೀನ ಎದೆಯಲ್ಲಿ
ನಗುನಗುತ್ತಲೆ ನಗೆಯಲೆಯಲ್ಲಿ ನಮ್ಮನ್ನು
ಮುಳುಗಿಸಿ, ಆಹ್ವಾನಿಸಿ ಕಾಫಿ ಕುಡಿಸಿ
ಒಳಗೊಳಗೇ ಬೇರುಕೊಯ್ದು
ಹೊರಗೆ ನೀರೆರೆಯುವ ಕರುಬಿಗಳಲ್ಲಿ
'ಅಲ್ಲಾರಖಾ' ಮೂಡಿಸೋ ವಸಂತ. ॥19॥

ಪ್ರಕಟಣೆ

## ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಕಚೇರಿ ಭಾನುವಾರಗಳಂದು ತೆರೆದಿರುತ್ತದೆ

ದಿನಾಂಕ 7ನೇ ಮೇ 2017ರಿಂದ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಕಚೇರಿ ಹಾಗೂ ಇತರ ಸೇವೆಗಳು ಭಾನುವಾರದಂದು ಸಾರ್ವಜನಿಕರಿಗೆ, ಸದಸ್ಯರಿಗೆ ಹಾಗೂ ಸಾಹಿತ್ಯಾಸಕ್ತರಿಗೆ ಲಭ್ಯ ಮಾಡಿಕೊಡುವ ಉದ್ದೇಶದಿಂದ ವಾರದ ರಜಾ ದಿನವನ್ನು ಬದಲಿಸಲಾಗಿದೆ. ಇನ್ನು ಮುಂದೆ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಕಚೇರಿ ಹಾಗೂ ಇತರ ಸೇವೆಗಳು ಪೂರ್ಣಪ್ರಮಾಣವಾಗಿ ಭಾನುವಾರ ಬೆಳಿಗ್ಗೆ 10.30 ಯಿಂದ ಸಂಜೆ 5.30 ವರೆಗೆ ಲಭ್ಯವಿರುತ್ತದೆ. ಪ್ರತಿ ಮಂಗಳವಾರ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಕಚೇರಿಗೆ ವಾರದ ರಜೆಯಿರುತ್ತದೆ.

### ಸೂವೆಂ ಅರಗ ಪ್ರಶಸ್ತಿ

ಈ ವರ್ಷದ ಸೂವೆಂ ಅರಗ ಪ್ರಶಸ್ತಿ ಡಾ. ನಟರಾಜ ತಲಘಟ್ಟಪುರ ಅವರಿಗೆ ಸಂದಿರುತ್ತದೆ. ಪ್ರಶಸ್ತಿಯನ್ನು ಪ್ರೊ॥ ಮಲ್ಲೇಪುರಂ ಜಿ.ವೆಂಕಟೇಶ್ ಅವರು ದಿನಾಂಕ 22–5–2017 ರಂದು ಪ್ರದಾನ ಮಾಡಲಿದ್ದಾರೆ. ಈ ಸಂಬಂಧದಲ್ಲಿ ಪ್ರೊ.ಸೂವೆಂ ಅರಗ ಹಾಗೂ ಡಾ. ನಟರಾಜ ತಲಘಟ್ಟಪುರ ಅವರ ಕಿರುಪರಿಚಯವನ್ನು ನೀಡಲಾಗಿದೆ.

### ಪ್ರೊ॥ ಸೂ.ವೆಂ. ಆರಗ – ಕಿರುಪರಿಚಯ



1930ರ ಜುಲೈ 2 ರಂದು ಶಿವಮೊಗ್ಗ ಜಿಲ್ಲೆಯ ಆರಗದಲ್ಲಿ ಹುಟ್ಟಿದ ಪ್ರೊ॥ ಆ.ಸೂ. ವೆಂಕಟರಾಮಯ್ಯನವರು ಗೋಣಿಬೀಡು, ಚಿಕ್ಕಮಗಳೂರು ಹಾಗೂ ಮೈಸೂರುಗಳಲ್ಲಿ ವಿದ್ಯಾಭ್ಯಾಸ ಮಾಡಿ, ಕನ್ನಡ ಎಂ.ಎ. ಪದವಿಯನ್ನು ಪಡೆದು 1953 ರಿಂದ 1988ರ ವರೆಗೆ ಬೆಂಗಳೂರಿನ ಸೇಂಟ್ ಜೋಸೆಫ್ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿದ್ದರು. ತಮ್ಮ ಕಾಲೇಜಿನಲ್ಲಿ ಕನ್ನಡ ಸಂಘವನ್ನು ಕಟ್ಟಿ, ವಿದ್ಯಾರ್ಥಿಗಳಿಗಾಗಿ ಸಾಹಿತ್ಯ ಸ್ಪರ್ಧೆಗಳನ್ನು ನಡೆಸಿದರು. ಅತ್ಯಂತ ಪ್ರಬುದ್ಧ ಸಾಹಿತ್ಯ ವಿದ್ಯಾರ್ಥಿಯಾಗಿದ್ದ ಪ್ರೊ॥ ಆರಗ ಅವರು ತಮ್ಮ ಜೀವಿತ ಕಾಲದಲ್ಲಿ ಹೆಚ್ಚೇನೂ ಪ್ರಕಟಿಸಲಿಲ್ಲ; ಆದರೆ ಅವರ ನಿಧನದ ನಂತರ ಅವರ ಮೂರು ಕೃತಿಗಳು– 'ವಿಫಲ ಯಾತ್ರೆ' (ಸಣ್ಣ ಕತೆಗಳು), 'ಕುಸುಮ ಸಂಕೋಲೆ' (ಕಾದಂಬರಿ) ಹಾಗೂ 'ಬರಹದಸುತ್ತಮುತ್ತ' – ಪ್ರಕಟವಾಗಿವೆ; ಅವರ ಸೃಜನಶೀಲ ಹಾಗೂ ವಿಮರ್ಶಾ ಸಾಮರ್ಥ್ಯಗಳಿಗೆ ಸಾಕ್ಷಿಯಾಗಿವೆ. 2012ರ ಮೇ 6 ರಂದು ತಮ್ಮ 82ನೇ ವಯಸ್ಸಿನಲ್ಲಿ ನಿಧನರಾದ ಅವರ ನೆನಪಿಗಾಗಿ ಅವರ ಮಕ್ಕಳು ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನದಲ್ಲಿ 'ಸೂ.ವೆಂ. ಆರಗ ವಿಮರ್ಶಾ ದತ್ತಿಯನ್ನು' ಸ್ಥಾಪಿಸಿದ್ದಾರೆ. ಪ್ರತಿ ವರ್ಷ ಪ್ರಕಟವಾಗುವ ಅತ್ಯಂತ ಶ್ರೇಷ್ಠ ವಿಮರ್ಶಾ ಕೃತಿಗೆ ಈ ಪ್ರಶಸ್ತಿ ಸಲ್ಲುತ್ತದೆ,

### ಅಭಿನಂದನೆಗಳು

### ಡಾ. ನಟರಾಜ ತಲಘಟ್ಟಪುರ



ವಿದ್ಯಾರ್ಹತೆ : ಎಂ.ಎ (ಕನ್ನಡ) ಚಿನ್ನದ ಪದಕ (ಕಾವ್ಯಮಿಮಾಂಸೆ), ಪಿಎಚ್.ಡಿ – 2011 – ಕನ್ನಡ ವಿಶ್ವವಿದ್ಯಾಲಯ – ಹಂಪಿ– ಆಧುನಿಕ ಕನ್ನಡ ನಾಟಕಗಳ ಸಾಂಸ್ಕೃತಿಕ ಅಧ್ಯಯನ

ವೃತ್ತಿ: ಬಿ.ಎನ್ಎಂ. ಪದವಿ ಕಾಲೇಜಿನಲ್ಲಿ ಕನ್ನಡ ಸಹ ಪ್ರಾಧ್ಯಾಪಕರು

ಏಳು ಪ್ರಕಟಿತ ಕೃತಿಗಳು ಹೊಂದಿರುವ ಇವರಿಗೆ ಬೇಂದ್ರೆ ಕಾವ್ಯ ಪುರಸ್ಕಾರ, ಯಶೋಧರ ನಾಟಕಕ್ಕೆ ಕರ್ನಾಟಕ ನಾಟಕ ಅಕಾಡೆಮಿ ನಗದು ಪುರಸ್ಕಾರ, ಸಾವಿರದ ರಾತ್ರಿ ನಾಟಕಕ್ಕೆ ಉಡುಪಿ ರಂಗಭೂಮಿ (ರಿ.) , ಡಾ.ಎಚ್. ಶಾಂತಾರಾವ್ ವಿಶ್ವ ಕನ್ನಡ ನಾಟಕ ರಚನಾ ಸ್ಪರ್ಧೆಯ ಪುರಸ್ಕಾರ ಹಾಗೂ ಇತರ ಪುರಸ್ಕಾರಗಳು ಸಂದಿವೆ

# ಮೇ 2017 ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು

## ಸ್ಥಳ : ಎಂ.ವಿ.ಸೀ. ಸಭಾಂಗಣ, ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನ



### 03–05–2017 ಬುಧವಾರ ಸಂಜೆ– 6:00 ಗಂಟೆ

**ಗಮಕವಾಹಿನಿ–16**

ಪಂಪಭಾರತ ಸಂಚಿಕೆ – 3

ವಾಚನ : ಶ್ರೀ ಅಭಿರಾಮ್ ಭರತ ವಂಶಿ

ವ್ಯಾಖ್ಯಾನ : ಶ್ರೀಮತಿ ನಾಗರತ್ನಮೂರ್ತಿ

ನೇತೃತ್ವ– ಶ್ರೀಮತಿಶ್ರೀಮತಿ

### 11–05–2017 ಗುರುವಾರ ಸಂಜೆ 6:00 ಗಂಟೆ

**"ಅಕ್ಕರಗೊಟ್ಟಿ"**

ತಿಂಗಳ ಮುಕ್ತ ಸಂಸ್ಕೃತಿ ಚಿಂತನೆ

ವಿಷಯ : ಆದಿಪುರಾಣ, 13ನೇ ಆಸ್ವಾಸ 15ನೇ ಪದ್ಯ (ಪದ್ಯವನ್ನು ಪುಟ 8ರಲ್ಲಿ ನೋಡಿ)

ಚಾಲನೆ: ಡಾ॥ ಬಿ.ಸಿ. ರಾಜಕುಮಾರ್, ಕನ್ನಡದ ಸಹಾಯಕ ಪ್ರಾಧ್ಯಾಪಕರು, ವಿಜಯ ಕಾಲೇಜು, ಬಸವನಗುಡಿ, ಬೆಂಗಳೂರು



### 15–05–2017 ಸೋಮವಾರ ಸಂಜೆ 6:00 ಗಂಟೆ

**ಕನ್ನಡ ಸಂಸ್ಕೃತಿ ದರ್ಶನ**

ಕನ್ನಡ ಸಾಂಸ್ಕೃತಿಕ ಚಿತ್ರ ಪ್ರದರ್ಶನ

### 22–5–2017 ಸೋಮವಾರ ಸಂಜೆ 6:00 ಗಂಟೆ

**'ಸೂ.ವೆಂ.ಆರಗ ವಿಮರ್ಶಾ ಪ್ರಶಸ್ತಿ' ಹಾಗೂ**

**'ಡಾ॥ ವಿಜಯಾ ಸುಬ್ಬರಾಜ್ ಗಣ್ಯಲೇಖಕಿ ಪ್ರಶಸ್ತಿ' ಪ್ರದಾನ ಸಮಾರಂಭ**



ಪ್ರಶಸ್ತಿ ಪ್ರದಾನ ಮತ್ತು ಅಧ್ಯಕ್ಷತೆ :

ಪ್ರೊ॥ ಮಲ್ಲೇಪುರಂ ಜಿ.ವೆಂಕಟೇಶ್

ಪ್ರಖ್ಯಾತ ಸಾಹಿತಿಗಳು : ವಿಶ್ರಾಂತ ಕುಲಪತಿಗಳು, ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾನಿಲಯ

ಪ್ರಶಸ್ತಿ ಪುರಸ್ಕತರು: ಡಾ॥ ನಟರಾಜ ತಲಘಟ್ಟಪುರ

1. ವಿಮರ್ಶಾ ಪ್ರಶಸ್ತಿ– ಡಾ॥ ನಟರಾಜ್ ತಲಘಟ್ಟಪುರ
2. ಗಣ್ಯಲೇಖಕಿ ಪ್ರಶಸ್ತಿ–ಶ್ರೀಮತಿ ಬಿ.ಟಿ.ಜಾಹ್ನವಿ



### 27–05–2007 ಶನಿವಾರ ಸಂಜೆ 6 : 00 ಗಂಟೆ

**ರಂಗಸಂವಾದ–10**

ನಾಟಕ : ಅಮ್ಮಾ ಹೀಗ್ಯಾಕೆ ಮಾಡಿದಳು.

ರಚನೆ : ಶ್ರೀ ವಿಜಯ್ ಎ.

ನಿರ್ದೇಶನ : ಶ್ರೀ ವಿಜಯ್ ಎ.



### 28–05–2017 ಭಾನುವಾರ ಬೆಳಗ್ಗೆ 11:00 ಗಂಟೆ



**ವೈಯಾಕರಣಿ ಗರಣಿ ಕೃಷ್ಣಾಚಾರ್ಯ ದತ್ತಿ ಕಾರ್ಯಕ್ರಮ**

**ಎಂ.ಕೆ. ಇಂದಿರಾ : ನೂರರ ನಮನ, ಕೃತಿಗಳ ಮನನ**

ವಿಚಾರ ಸಂಕಿರಣ:

1. ಉಷಾಪಿರೈ – "ನಾ ಕಂಡಂತೆ ಎಂ.ಕೆ. ಇಂದಿರಾ"
2. ಸಂಯುಕ್ತಾ ಪುಲಿಗಲ್ – "ಇಂದಿನ ಸಾರಸ್ವತ ಲೋಕಕ್ಕೆ ಪ್ರಸ್ತುತರಾಗುವ ಎಂ.ಕೆ. ಇಂದಿರಾ"
3. ಸಹ್ಯಾದ್ರಿ ನಾಗರಾಜ್ – "ಇಂದಿರಾ ಸೃಷ್ಟಿಸಿದ ಪ್ರಮುಖ ಪಾತ್ರಗಳ ಈ ಹೊತ್ತು: ಮನಃಶಾಸ್ತ್ರೀಯನೋಟ"

### 31–05–2017 ಬುಧವಾರ ಸಂಜೆ 6:00 ಗಂಟೆ

**ವಿ. ನಾಗರಾಜರಾವ್ ಸಮೂಹ ಮಾಧ್ಯ ಪ್ರಶಸ್ತಿ ಪ್ರದಾನ**

ಪ್ರಶಸ್ತಿ ಪುರಸ್ಕೃತರು : ಶ್ರೀ ವಸಂತ ನಾಡಿಗೇರ, ಹಿರಿಯ ಪತ್ರಕರ್ತರು

# ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ಮಾರ್ಚ್ 2017 – ಏಪ್ರಿಲ್ 2017 ತಿಂಗಳುಗಳಲ್ಲಿ ನಡೆದ ಕಾರ್ಯಕ್ರಮಗಳು

**18ಮಾರ್ಚ್ 2017**

**ರಾವ್ ಬಹದ್ದೂರ್ ಶ್ರೀ ಆರ್.ನರಸಿಂಹಾಚಾರ್ ಸ್ಮಾರಕ ದತ್ತಿ ನಿಧಿಯ ಉಪನ್ಯಾಸ ಕಾರ್ಯಕ್ರಮ.**




ದಿ ಮಿಥಿಕ್ ಸೊಸೈಟಿ, ಬೆಂಗಳೂರು, ಸಂಸ್ಥೆಯು, ಆರ್. ನರಸಿಂಹಾಚಾರ್ ನೆನಪಿನ ದತ್ತಿ ಉಪನ್ಯಾಸವನ್ನು ಬಿ.ಎಂ.ಶ್ರೀ ಪ್ರತಿಷ್ಠಾನದಲ್ಲಿ ಆಯೋಜಿಸಬೇಕೆಂಬ ಅಪೇಕ್ಷೆಯಂತೆ, ಉಪನ್ಯಾಸಕರಾಗಿ ಡಾ|| ರಮಾನಂದ್, ಪ್ರಾಧ್ಯಾಪಕರು, ಸಿಂಧಿ ಕಾಲೇಜು, ಹೆಬ್ಬಾಳ, ಬೆಂಗಳೂರು ಇವರು "ವರ್ತಮಾನ ನೆಲೆಯಲ್ಲಿ ಚಾಲುಕ್ಯರ ಇಮ್ಮಡಿ ಪುಲಕೇಶಿ" ಎಂಬ ವಿಷಯದ ಬಗ್ಗೆ ಉಪನ್ಯಾಸ ನೀಡಲು ಆಗಮಿಸಿ, ಕಾರ್ಯಕ್ರಮವನ್ನು ಅತ್ಯಂತ ಯಶಸ್ವಿಯಾಗಿ ನಡೆಸಿಕೊಟ್ಟರು.

ಕನ್ನಡಿಗರ ಅಸ್ಮಿತೆಯು ಕದಂಬರ ಕಾಲದಲ್ಲಿ ಪ್ರಾರಂಭವಾಗಿ, ಅವರ ಪತನಾನಂತರ, ಚಾಲುಕ್ಯರು ತಮ್ಮ ಪ್ರಾಬಲ್ಯವನ್ನು ಮುಂದುವರೆಸಿಕೊಂಡು ಬಂದ ಶೂರರು. ಭಾರತದೇಶದಲ್ಲಿ ಆಳಿದ ಪ್ರಮುಖ ರಾಜಮನೆತನಗಳಲ್ಲಿ ಚಾಲುಕ್ಯರು ಮುಖ್ಯರಾದವರು. ರಾಜಕೀಯದಲ್ಲಿ ಅವರ ಉನ್ನತ ಸಾಧನೆ, ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಅವರ ಕಾಣಿಕೆ, ಭಾರತೀಯ ಇತಿಹಾಸದಲ್ಲಿ ಚಾಲುಕ್ಯರು ಅಮರ ಕೀರ್ತಿಯನ್ನು ಪಡೆದಿದ್ದಾರೆ.

ಚಾಲುಕ್ಯ ಶಬ್ದದ ವ್ಯುತ್ಪತ್ತಿ, ಅದಕ್ಕೆ ಅಂಟಿಕೊಂಡ ದಂತಕಥೆಗಳು, ಅವರ ಮೂಲ, ವಂಶ, ಗೋತ್ರ ಅವರ ಆರಾಧ್ಯದೈವ, ಅವರ ಚಿಹ್ನೆ, ಚಾಲುಕ್ಯರು ಕವಲುಗಳಾಗಿ ಭಾರತದ ವಿವಿಧ ಭಾಗಗಳಲ್ಲಿ ಆಳಿದ ಭಾಗಗಳು, ವಾಸ್ತು ಮತ್ತು ಶಿಲ್ಪಗಳಿಗೆ ಅವರು ಕೊಟ್ಟ ಕಾಣಿಕೆ, ಹೀಗೆ ಎಲ್ಲವನ್ನೂ ಸಂಕ್ಷಿಪ್ತವಾಗಿ ಉಪನ್ಯಾಸಕಾರರು ಉಲ್ಲೇಖಿಸಿದರು. ಇಮ್ಮಡಿ ಪುಲಿಕೇಶಿಯ ರಾಜಧರ್ಮ ಪರಿಪಾಲನೆ, ಧೈರ್ಯ, ನಿಷ್ಠೆ ಸಂಘಟನಾ ಶಕ್ತಿ, ಸಮಯ ಪ್ರಜ್ಞೆ ಮತ್ತು ಪಾಲನೆ, ಪ್ರಭು ಗುಣ, ಮತ್ತು ಉತ್ಸಾಹಗುಣ(ರಾಜನ ಮೂರುಗುಣಗಳು) ಅವನ ಎಲ್ಲಾ ಕಾರ್ಯಗಳಲ್ಲೂ, ಘಟನೆಗಳಲ್ಲೂ ಕಾಣಬಹುದಿತ್ತು.

ಕಾರ್ಯಕ್ರಮದ ಪ್ರಾರಂಭದಲ್ಲಿ ದಿ ಮಿಥಿಕ್ ಸೊಸೈಟಿಯ ಕಾರ್ಯದರ್ಶಿ ಶ್ರೀ ಪ್ರಸನ್ನಕುಮಾರ ಅವರು, ದಿವಂಗತ ಆರ್.ನರಸಿಂಹಾಚಾರ್ ಅವರ ಪರಿಚಯ ಶಾಸನ ಸಂಪುಟಗಳ ಸಂಪಾದನೆಯಲ್ಲಿ ಅವರ ಕೊಡುಗೆ, ಭಟ್ಟಾಕಳಂಕನ 'ಶಬ್ದಾನುಶಾಸನಂ' ಅವರು ಪರಿಷ್ಕರಿಸಿದ ಪಾಠ, ಮುಂತಾದ ಸಾಧನೆಯ ಬಗ್ಗೆ ತಿಳಿಸಿದರು.

ಈ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಖ್ಯಾತ ಮತ್ತು ಹಿರಿಯ ಸಂಶೋಧಕರಾದ ಡಾ|| ಚಿದಾನಂದಮೂರ್ತಿ ಅವರು ವಹಿಸಿದ್ದರು. ಅವರು ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ, ಯಾವ ವಿಷಯವನ್ನು ಬಿಡದೆ ಮಾಹಿತಿ ನೀಡಿದ ಉಪನ್ಯಾಸಕರನ್ನು ಪ್ರಶಂಸಿದರು.

ಪ್ರೊ. ಅಬ್ದುಲ್ ಬಷೀರ್ ಅವರ ವಂದನಾರ್ಪಣೆಯೊಂದಿಗೆ ಕಾರ್ಯಕ್ರಮ ಮುಕ್ತಾಯಗೊಂಡಿತು.

**ಡಾ|| ಶಂಬಾಜೋಶಿ ದತ್ತಿ ಮತ್ತು ಡಾ.ಉಪ್ಪಂಗಳ ರಾಮಭಟ್ಟ ದತ್ತಿ**

ದಿನಾಂಕ 22–03–2017ರಂದು ಡಾ|| ಶಂಬಾಜೋಶಿ ದತ್ತಿ ಮತ್ತು ಡಾ. ಉಪ್ಪಂಗಳ ರಾಮಭಟ್ಟ ದತ್ತಿ ಕಾರ್ಯಕ್ರಮದಡಿಯಲ್ಲಿ ಪ್ರೊ. ಶಿವರಾಮಯ್ಯ. ನಿವೃತ್ತ ಕನ್ನಡ ಪ್ರಾಧ್ಯಾಪಕರು, ಹಿರಿಯ ಸಂಸ್ಕೃತಿ ಚಿಂತಕರು, ಅವರು 'ಪಂಪಭಾರತ ಮತ್ತು ಸಂಗಂ ಸಾಹಿತ್ಯ' ಎಂಬ ವಿಷಯದ ಬಗ್ಗೆ ವಿದ್ವತ್ ಪೂರ್ಣ ಉಪನ್ಯಾಸ ನೀಡಿದರು. ಕಾರ್ಯಕ್ರಮದ ಆರಂಭದಲ್ಲಿ ಡಾ.ಪಿ.ವಿ.ನಾರಾಯಣ ಅವರು ಪ್ರೊ. ಶಿವರಾಮಯ್ಯ. ಅವರ ಸಾಧನೆಗಳ ಬಗ್ಗೆ ಸಭೆಗೆ ತಿಳಿಸಿ ಎಲ್ಲರಿಗೂ ಸ್ವಾಗತ ಕೋರಿದರು. ಪ್ರೊ|| ಜಿ. ಅಬ್ದುಲ್ ಬಷೀರ್ ಅವರು ವಂದನಾರ್ಪಣೆ ಮಾಡಿದರು.




**"ರಂಗ ಸಂವಾದ–7"**

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಮತ್ತು ಗ್ರೀನ್ ಸ್ಟೇಜ್ ಸಹಯೋಗದಲ್ಲಿ ಮೂಡಿಬಂದ ನಾಟಕ "ಇದು ಹತ್ಯೆಯೋ? ಆತ್ಮಹತ್ಯೆಯೋ?"

ರಚನೆ, ನಿರ್ದೇಶನ : ಶ್ರೀ ವಿಜಯ್ ಎ.



ಪ್ರತಿ ತಿಂಗಳೂ ಕೊನೆಯ ಶನಿವಾರ ಸಂಜೆ ನಡೆಯುವ ಬಿ.ಎಂ.ಶ್ರೀ. ಪ್ರತಿಷ್ಠಾನ ಮತ್ತು ಗ್ರೀನ್ ಸ್ಟೇಜ್ ಸಹಯೋಗದಲ್ಲಿ ನಡೆಸಲಾಗುವ 'ರಂಗ ಸಂವಾದ' ಕಾರ್ಯಕ್ರಮದಲ್ಲಿ ಸಾಮಾಜಿಕ ಚಿಂತನೆಗಳನ್ನು ಒಳಗೊಳ್ಳುವ ನಾಟಕಗಳ ಪ್ರದರ್ಶನ ಮಾಡಲಾಗುತ್ತದೆ. ಮಹಿಳೆಯರ ಮೇಲೆ ಆಗುತ್ತಿರುವ ದೌರ್ಜನ್ಯಗಳ ಬಗ್ಗೆ ಮನ ಮುಟ್ಟುವಂತೆ ಈ ನಾಟಕವನ್ನು ಪ್ರದರ್ಶಿಸಲಾಯಿತು. ಡಾ. ಪಿ ವಿ ನಾರಾಯಣ ಅವರು ಸ್ವಾಗತವನ್ನು ಕೋರಿ ಕಾರ್ಯಕ್ರಮಕ್ಕೆ ಚಾಲನೆ ನೀಡಿದರು .ಪ್ರೊ. ಜಿ. ಅಬ್ದುಲ್ ಬಷೀರ್ ವಂದನಾರ್ಪಣೆ ಸಲ್ಲಿಸಿದರು.

**ಶ್ರೀ ಕಣಕಟ್ಟೆ ಕೃಷ್ಣಮೂರ್ತಿರಾವ್ ದತ್ತಿ ಕಾರ್ಯಕ್ರಮ**

ವಿಷಯ : ದೇವರನಾಮಗಳ ಹಾಡುಗಾರಿಕೆ

ಹಾಡಿದವರು : ಶ್ರೀಮತಿ ಕಮಲಿನಿ ಹೆಗಡೆ

27–03–2017 ರಂದು ಶ್ರೀ ಕಣಕಟ್ಟೆ ಕೃಷ್ಣಮೂರ್ತಿರಾವ್



ದತ್ತಿ ಕಾರ್ಯಕ್ರಮದಡಿಯಲ್ಲಿ ವಿದುಷಿ ಶ್ರೀಮತಿ ಕಮಲಿನಿ ಹೆಗಡೆ ಅವರು ಸುಶ್ರಾವ್ಯವಾಗಿ ದೇವರನಾಮಗಳನ್ನು ಹಾಡಿ ಸಭೆಯನ್ನು ರಂಜಿಸಿದರು. ಈ ಕಾರ್ಯಕ್ರಮದಲ್ಲಿ ವಿದ್ವಾನ್ ಶ್ರೀ ಜಯರಾಂ ಅವರು ವಯೋಲಿನ್ ನುಡಿಸಿದರು ಹಾಗೂ ವಿದ್ವಾನ್ ಶ್ರೀ ನಾಗರಾಜ್ ಅವರು ತಬಲಾ ಸಾಥ್ ನೀಡಿದರು.

ಆರಂಭದಲ್ಲಿ ಡಾ.ಪಿ ವಿ ನಾರಾಯಣ ಅವರು ಸ್ವಾಗತವನ್ನು ಕೋರಿ ವಿದುಷಿ ಶ್ರೀಮತಿ ಕಮಲಿನಿ ಹೆಗಡೆ ಹಾಗೂ ಸಹ ಕಲಾವಿದರ ಪರಿಚಯ ಮಾಡಿಕೊಟ್ಟರು. ಪ್ರೊ. ಜಿ. ಅಬ್ದುಲ್ ಬಷೀರ್, ವಂದನಾರ್ಪಣೆ ಸಲ್ಲಿಸಿದರು

**ಗಮಕವಾಹಿನಿ–15**

05–04–2017 ಗಮಕವಾಹಿನಿ–15

ಪಂಪಭಾರತ ಸಂಚಿಕೆ – 2

ವಾಚನ : ಕು॥ ಭಾವನಾ ಉಮೇಶ್.

ವ್ಯಾಖ್ಯಾನ : ಡಾ॥ ಅನ್ನದಾನೇಶ್

ನೇತೃತ್ವ– ಶ್ರೀಮತಿ ಶ್ರೀಮತಿ

05–04–2017 ರಂದು ಪ್ರತಿ ತಿಂಗಳ ಮೊದಲ ಬುಧವಾರ ನಡೆಯುವ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಮತ್ತು ವಾಗ್ದೇವಿ ಗಮಕ ಕಲಾ ಪ್ರತಿಷ್ಠಾನದ ಜಂಟಿ ಕಾರ್ಯಕ್ರಮವಾದ ಗಮಕವಾಹಿನಿ



ಅಡಿಯಲ್ಲಿ ಶ್ರೀಮತಿ, ಶ್ರೀಮತಿಯವರ ನೇತೃತ್ವದಲ್ಲಿ "ಪಂಪಭಾರತ – 2" ಗಮಕವಾಹಿನಿ–ಮಾಲೆಯನ್ನು ಹಮ್ಮಿಕೊಂಡಿತ್ತು. ಪಂಪಭಾರತದ ಸಂಗ್ರಹ ರಚನೆ ಡಾ॥ ಪಿ.ವಿ.ನಾರಾಯಣ. ಎರಡನೇ ಕಂತಿನ ಭಾಗವಾಗಿ ವಿದ್ಯಾರ್ಥಿನಿ ಕು॥ ಭಾವನಾ ಉಮೇಶ್ ಸುಶ್ರಾವ್ಯವಾಗಿ ವಾಚನ ಮಾಡಿ ಸಭಿಕರ ಮೆಚ್ಚುಗೆಗೆ ಪಾತ್ರಳಾದರು. ವ್ಯಾಖ್ಯಾನದ ಭಾಗವನ್ನು ಡಾ॥ ಅನ್ನದಾನೇಶ್ ಅವರು ನೀಡಿ ಗಮಕಾಸಕ್ತರ ಮೆಚ್ಚುಗೆಗಳಿಸಿದರು.

**ಕನ್ನಡ ಸಂಸ್ಕೃತಿ ದರ್ಶನ ಕಾರ್ಯಕ್ರಮ ಮಾಲೆ**

ದಿನಾಂಕ 17–04–2017ರಂದು ಡಾ.ವಿ.ಕೆ.ಗೋಕಾಕ್ ಹಾಗೂ ರೆವರೆಂಡ್ ಫರ್ಡಿನಾಂಡ್ ಕಿಟ್ಟೆಲ್ ಅವರ ಬಗ್ಗೆ ಸಾಕ್ಷ್ಯ ಚಿತ್ರವನ್ನು ಪ್ರದರ್ಶಿಸಲಾಯಿತು. ರೆವರೆಂಡ್ ಫರ್ಡಿನಾಂಡ್ ಕಿಟ್ಟೆಲ್ ಅವರು 8 ಏಪ್ರಿಲ್ 1832ರಲ್ಲಿ ಜನಿಸಿದ್ದರು. ಡಾ. ವಿ.ಕೆ.ಗೋಕಾಕ್ ಅವರು 28 ಏಪ್ರಿಲ್ 1992ರಂದು ನಿಧನರಾದರು. ಈ ಇಬ್ಬರು ಮಹನೀಯರ ಕುರಿತ ಸಾಕ್ಷ್ಯ ಚಿತ್ರಗಳನ್ನು ಪ್ರದರ್ಶಿಸಲಾಯಿತು.

**ಸಿ.ಕೆ. ನಾಗರಾಜರಾವ್, ಕೆ.ಪಿ.ರಾವ್, ಕೊರಟಿ ಶ್ರೀನಿವಾಸರಾವ್ ದತ್ತಿ ಕಾರ್ಯಕ್ರಮ**

13–04–2017 ರಂದು ಆಕಾಶವಾಣಿಯ ನಿವೃತ್ತ ನಿರ್ದೇಕರು



ಹಾಗೂ ಸುಪ್ರಸಿದ್ಧ ಸಾಹಿತಿಡಾ. ಬಸವರಾಜ ಸಾದರ ಅವರು ಕರ್ನಾಟಕ ಕಂಡ ಜನಪ್ರಿಯ ಕಾದಂಬರಿಕಾರರು ಹಾಗೂ ಕನ್ನಡ ಭಾಷೆಯ ಏಳಿಗೆಗಾಗಿ ಶ್ರಮಿಸಿದ್ದ ಬಸವರಾಜ ಕಟ್ಟೀಮನಿ ಅವರನ್ನು ಕುರಿತು ಸವಿವರವಾದ ಉಪನ್ಯಾಸವನ್ನು ನೀಡಿದರು. ಬಸವರಾಜ ಕಟ್ಟೀಮನಿ ಅವರ ಬದುಕು ಬರಹಗಳ ಬಗ್ಗೆ ಬಹಳ ಕುತೂಹಲ ಹಾಗೂ ಹೆಮ್ಮೆ ಮೂಡುವಂತೆ ಸ್ವಾರಸ್ಯಕರವಾಗಿ ತಿಳಿಸಿಕೊಟ್ಟರು. ಮೊದಲಿಗೆ ಡಾ.ಪಿ ವಿ ನಾರಾಯಣ ಅವರು ಡಾ.ಬಸವರಾಜ ಸಾದರ ಅವರ ಪರಿಚಯ ಮಾಡಿಕೊಟ್ಟು ಸ್ವಾಗತ ಕೋರಿದರು. ಪ್ರೊ. ಜಿ. ಅಬ್ದುಲ್ ಬಷೀರ್ ವಂದನಾರ್ಪಣೆ ಸಲ್ಲಿಸಿದರು.

**ಪುಟ 7ರಲ್ಲಿ ಮುಂದುವರಿದಿದೆ.**




**ಕೆತ್ತು:** ಈ ಶಬ್ದವು ಮಿಡುಕು ಎಂಬರ್ಥದಲ್ಲಿ ಬಳಕೆಯಾಗುವ ಕ್ರಿಯಾಪದ. ತಮಿಳಿನಲ್ಲಿದು 'ಕೆತ್ತು' ಎಂದೂ, 'ತುಳುವುನಲ್ಲಿ 'ಕಿತ್ತುನಿ' ಎಂದೂ ಬಳಕೆಯಲ್ಲಿದೆ. '"ಕೆತ್ತು–ಸ್ಪಂದನೇ" ಎಂದು ಕೇಶಿರಾಜನ 'ಶಬ್ದಮಣಿದರ್ಪಣ'ದಲ್ಲಿ ಅರ್ಥ ಹೇಳಿದೆ. ಕಣ್ಣಮಿಡುಕು, ತೋಳಿನ ಮಾಂಸಖಂಡದ ಮಿಡುಕು ಎಂಬರ್ಥಗಳಲ್ಲಿ ಈ ಶಬ್ದವು 'ಪಂಪಭಾರತ'ದಲ್ಲಿದೆ ("ಕೆತ್ತಿತ್ತು ದಲ್ ಬಲಗಣ್ಣುಂ ಬಲದೋಳುಂ ಆ ಬಲಿಬಲಪ್ರಧ್ವಂಸಿಗೆ"). ಈ ಕ್ರಿಯೆಗಳು ಶುಭಶಕುನದ ಸಂಕೇತ ಎಂಬ ಇಂದಿನ ನಂಬಿಕೆಯು ಅಂದೂ ಇದ್ದುದನ್ನು ಈ ವಾಕ್ಯ ದೃಢಪಡಿಸುತ್ತದೆ."ಅಂಗೈ ತಿಂದುದೆನ್ನ ಕಂಗಳು ಕೆತ್ತುತ್ತಿಹವಯ್ಯಾ, ಬಂದಹರಯ್ಯಾ ಪುರಾತನರೆನ್ನ ಮನೆಗೆ" ಎಂಬ ಇದೇ ಅರ್ಥದ ಮಾತು ಬಸವಣ್ಣನ ವಚನವೊಂದರಲ್ಲಿದೆ. ಪಂಪ ಈ ಶಬ್ದವನ್ನು ಸನ್ನೆ ಎಂಬರ್ಥದಲ್ಲಿಯೂ ಬಳಸಿದ್ದಾನೆ: "ಕುಂಜದಡಪದ ಡವಕೆಯ ಪರಿಚಾರಕರೆಲ್ಲರುಮಂ ಕಣ್ಗೆತ್ತಿ ಕಳೆದು ಏಕಾಂತದೊಳ್ ಕನ್ನೆಯನಿಂತೆಂದರ್ಳ" [ಕಣ್ಗೆತ್ತು=ಕಣ್ಸನ್ನೆ ಮಾಡು]. 'ಕೆತ್ತುಗುಂದು' ಎಂಬುದು ಹೃದಯದ ಮಿಡಿತ ನಿಂತುಹೋಗು ಎಂಬರ್ಥದಲ್ಲಿ ಬಳಕೆಯಾಗುತ್ತದೆ: "ಇಂಗದ ಬೆಮರ್ ಮಿಡುಕೋಡದ ಪುರ್ವು ಬೀಗಿ ಬೀಯದ ತುಟಿ ಕೆತ್ತುಗುಂದದ ಕುಚಂ ನಡುಕಂಗಿಡದೂರು' (ನೇಮಿಚಂದ್ರನ 'ಲೀಲಾವತಿ'). ಹಲವು ವೇಳೆ ಅಲುಗಾಡು, ನಡುಗು ಎಂಬರ್ಥವೂ ಇದಕ್ಕೆ ಪ್ರಾಪ್ತವಾಗುತ್ತದೆ: "ಕೆತ್ತುವ ತೋಳ್ ಕಂಪಿಸುವ ಹಸ್ತಂ" ಎಂಬುದು ಹರಿಹರನ 'ಗಿರಿಜಾ ಕಲ್ಯಾಣ'ದ ವಾಕ್ಯ ಇದಕ್ಕೆ ಉದಾಹರಣೆ. "ಕೆತ್ತಿದವು ಮೀಸೆಗಳು" ಕೋಪವನ್ನು ಹೇಳಲು ಕುಮಾರವ್ಯಾಸನು ಬಳಸುವ ನುಡಿಗಟ್ಟು.

'ಕೆತ್ತು' ಎಂದರೆ ಮೇಲ್ಪದರವನ್ನು ಕತ್ತರಿಸು ಎಂಬರ್ಥವೂ ಇದೆ. ಈ ಅರ್ಥದಲ್ಲಿ ಈ ಶಬ್ದವು ತಮಿಳಿನಲ್ಲಿ 'ಚೆಟ್ಟು' ಎಂದೂ, ಮಲಯಾಳಂನಲ್ಲಿ 'ಚೆಟ್ಟುಕ' ಎಂದೂ, ತುಳುವಿನಲ್ಲಿ 'ಕೆತ್ತುಣಿ' ಎಂದೂ ಬಳಕೆಯಲ್ಲಿದೆಯೆಂದು ಹೇಳುತ್ತಾರೆ. ಮಿಡುಕು ಎಂಬರ್ಥದೊಡನೆ 'ಶಬ್ದಮಣಿದರ್ಪಣ'ವು "ಕೆತ್ತು–ತನೂಕರಣೇ" ಎಂದೂ ಅರ್ಥವನ್ನು ನೀಡುತ್ತದೆ. "ಕೆತ್ತಿದ ತಿಗುಡು ಹತ್ತುವುದೆ ಮುನ್ನಿನಂತೆ" ಎಂಬ ವಾಕ್ಯವು ಅಕ್ಕಮಹಾದೇವಿಯ ಒಂದು ವಚನದ್ದು [ತಿಗುಡು=ತೊಗಟೆ]. "ಕುಪ್ಪಸದಂತೆ ಬೆನ್ನಂ ಪತ್ತಿ ಕೆತ್ತುವರ್" ಎಂಬುದು 'ಧರ್ಮಾಮೃತ'ದ ಪ್ರಯೋಗ."ಭಕ್ತರ ಕಂಡು ಬಂಧಿಪಳ ನಡುನೆತ್ತಿಯ ಕೆತ್ತಬೇಕು" ಎಂಬುದು ಪುರಂದರದಾಸರ ಹಾಡಿನ ಮಾತು. ಈ ಶಬ್ದವನ್ನು ಮುಚ್ಚು ಎಂಬರ್ಥದಲ್ಲಿಯೂ ಬಳಸುತ್ತಿದ್ದರು: "ಪಡಿಯಂ ಕೆತ್ತಿ ಅಗುಳಿಯನಿಕ್ಕಿ .. ..ಪಂಜರದ ಪಡಿಕೆಯೊಳಿರ್ದ ಎನ್ನೊಳಿಂತೆಂದಂ" ಎಂಬುದು 'ಕರ್ಣಾಟಕ ಕಾದಂಬರಿ' ಕಾವ್ಯದ ಮಾತು.

ವಿಗ್ರಹವನ್ನು ಕಂಡರಿಸು ಎಂಬರ್ಥವೂ ಈ ಶಬ್ದಕ್ಕಿದೆ. "ಗರ್ಭಗೃಹಸ್ತಿತ ಮಂಟಪ ಶಿಖರ ಶಿಷ್ಪಿ ಸಹವಾಗಿ ಕೆತ್ತು ಜಲ್ಲಾಂದರವ ಮಾಡಿಸಿ" ಎಂಬ ವಾಕ್ಯಖಂಡ ಶಾಸನವೊಂದರಲ್ಲಿದೆ. "ಹುತ್ತುಗಟ್ಟದೆ ಚಿತ್ತ ಮತ್ತೆ ಕೆತ್ತೀತೇನು ಪುರುಷೋತ್ತಮನ ಆ ಅಂಥ ರೂಪ–ರೇಖೆ" ಎಂಬ ಸಾಲುಗಳು ಗೋಪಾಲಕೃಷ್ಣ ಅಡಿಗರ 'ಶ್ರೀರಾಮನವಮಿಯ ದಿವಸ' ಕವನದ ಕೊನೆಯ ಸಾಲುಗಳು.

=====

**ಡಾ ॥ ಇಂದಿರಾ ಹೆಗಡೆ**

ರಾಷ್ಟ್ರಕವಿ ಗೋವಿಂದ ಪೈ ಸಾಂಸ್ಕೃತಿಕ ಅಧ್ಯಯನ' ಎಂಬ ಸಂಶೋಧನಾ ಕೇಂದ್ರ ಮತ್ತು ಮಣಿಪಾಲ ವಿ.ವಿ. ವತಿಯಿಂದ ಪೊಳಲಿ ಶೀನಪ್ಪ ಹೆಗಡೆ ಹೆಸರಿಲ್ಲಿ ತುಳು ಸಂಶೋಧಕರಿಗೆ ನೀಡುವ ಪೊಳಲಿ ಶೀನಿಪ್ಪ ಹೆಗಡೆ ಪ್ರಶಸ್ತಿಗೆ ಪ್ರಸಿದ್ಧ ಬರಹಗಾರ್ತಿ, ಸಂಶೋಧಕಿ ಡಾ॥ ಇಂದಿರಾ ಹೆಗ್ಡೆ ಆಯ್ಕೆಯಾಗಿದ್ದಾರೆ. ಬಿ.ಎಂ.ಶ್ರೀ ಪ್ರತಿಷ್ಠಾನದ ಸದಸ್ಯರು ಮತ್ತು ಈ ಹಿಂದೆ ಕಾರ್ಯಕಾರಿ ಸಮಿತಿಯ ಸದಸ್ಯರಾಗಿದ್ದರು.

ಸೃಜನಶೀಲ ಸಾಹಿತಿಯೂ ಆಗಿರುವ ಡಾ. ಇಂದಿರಾ ಹೆಗಡೆ ಕಥೆ, ಕಾದಂಬರಿ, ಕವನ ಸಂಕಲನಗಳನ್ನು ಪ್ರಕಟಿಸಿದ್ದಾರೆ. ತುಳುನಾಡಿನ ಗ್ರಾಮಾಡಳಿತ ಮತ್ತು ಅಜಲು,ತುಳುವರೆ ಅಟಿಲ್ ಅರಗಣೆ, ಚೇಳಾರು ಗುತ್ತು ಮಂಜನ್ನಾಯ್ಗರ್ ಸಾಂಸ್ಕೃತಿಕ ಶೋಧ ಮೊದಲಾದವುಗಳು ಅವರ ಪ್ರಮುಖ ಅಧ್ಯಯನಾತ್ಮಕ ಕೃತಿಗಳು. ಅವರಿಗೆ ವಸುದೇವ ಭೂಪಾಲಂ ಸಾಹಿತ್ಯ ಪುರಸ್ಕಾರ, ಅತ್ತಿಮಬ್ಬೆ, ಅನಂತ ರಂಗ ಸಂಶೋಧನಾ ಪ್ರಶಸ್ತಿ, ಅಪ್ಪ ಪ್ರಶಸ್ತಿ, ಕೇರಳ ರಾಜ್ಯ ಪ್ರಶಸ್ತಿ ಲಭಿಸಿವೆ. ದೇಶ ವಿದೇಶಗಳ ಪ್ರವಾಸ ಕೈಗೊಂಡು ಪ್ರವಾಸ ಕಥನ ಪ್ರಕಾರದಲ್ಲಿಯೂ ಕೃಷಿ ನಡೆಸಿದ್ದಾರೆ.

**ಕೈ1:** ಇದನ್ನು ಕೆಯ್ ಕಯ್ ಎಂತಲೂ ಬರೆಯುತ್ತಿದ್ದರು. ಕನ್ನಡದಲ್ಲಿ ಇದಕ್ಕೆ ಕ್ರಿಯಾಪದವಾಗಿ ಮಾಡು ಎಂದೂ ನಾಮವಾಚಕವಾಗಿ ಹಸ್ತ ಎಂದೂ ಅರ್ಥವಿದೆ. ದ್ರಾವಿಡ ಪದವಾದ ಇದು ಕ್ರಿಯೆಯ ಅರ್ಥದಲ್ಲಿ ತಮಿಳು ಮಲಯಾಳಂಗಳಲ್ಲಿ ಚೆಯ್ ಎಂದೂ, ತೆಲುಗಿನಲ್ಲಿ ಚೇಯು ಎಂದೂ ಆಗುತ್ತದೆ. ಪ್ರಾಯಶಃ ಮಾಡುವುದು ಕೈಗಳಿಂದಾದ್ದರಿಂದ ಕ್ರಿಯಾರ್ಥವಿದ್ದುದು ನಾಮಪದವಾಗಿಯೂ ಬಳಕೆಗೊಂಡಿರಬಹುದು. ಈ ಅರ್ಥದಲ್ಲಿ ಈ ಪದವು ತಮಿಳು ತುಳುಗಳಲ್ಲಿ ಕೈ ಎಂದೂ ಮಲಯಾಳಂನಲ್ಲಿ ಕಯ್ಯಿ ಎಂದೂ ತೆಲುಗಿನಲ್ಲಿ ಚೇಯಿ ಎಂದೂ ಆಗುತ್ತದೆ. ಕ್ರಿಶ. ಏಳನೆಯ ಶತಮಾನದ ಬಾದಾಮಿಯ ಕಪ್ಪೆಯ ಅರಭಟ್ಟನ ಶಾಸನದಲ್ಲಿ "ಒಳ್ಳಿತ್ತ ಕೆಯ್ವೊರಾರ್" ಎಂಬ ಪ್ರಯೋಗವಿದೆ. "ವಾದಂಗೆಯ್ದು ಗೆಲ್ದು" ಎಂಬ ಪ್ರಯೋಗ 'ವಡ್ಡಾರಾಧನೆ'ಯಲ್ಲದೆ. ಈ ಶಬ್ದಕ್ಕೆ ಈಗಲೂ ಸಂಭೋಗಿಸು ಎಂಬ ಅರ್ಥವಿದೆ. ರಾಜ್ಯ ಎಂಬ ಶಬ್ದದೊಡನೆ ಸೇರಿ 'ರಾಜ್ಯಂಕೆಯ್' ಎಂಬ ಸಮಾಸಪದಕ್ಕೆ ರಾಜ್ಯವನ್ನಾಳು ಎಂಬ ಅರ್ಥ ಉಂಟಾಗುತ್ತದೆ ("ಸ್ವಸ್ತಿಶ್ರೀಪುರುಷ ರಾಜ್ಯಂಕೆಯೆ.. .." – ಎಂಟನೆಯ ಶತಮಾನದ ಶಾಸನ). ಇದು ರಾಜ್ಯಂಗೆಯ್ ಎಂಬ ರೂಪದಲ್ಲಿಯೂ ವ್ಯಾಪಕವಾಗಿ ಬಳಕೆಯಲ್ಲಿದೆ ("ಸಿಂಹವರ್ಮನೆಂಬರಸಾಗಿ ರಾಜ್ಯಂಗೈಯ್ಯುತ್ತುಂ" – ದುರ್ಗಸಿಂಹನ 'ಪಂಚತಂತ್ರ'). ಕೆಯ್ ಎಂಬುದಕ್ಕೆ ಪ್ರತ್ಯಯ ಸೇರಿ ಕೈತ ಅಥವಾ ಕೈಮೆ ಎಂಬ ರೂಪವನ್ನು ಪಡೆದು ಕೆಲಸ ಎಂಬರ್ಥವನ್ನು ಸೂಚಿಸುತ್ತದೆ. ಕೈತ ಎಂದರೆ ಮಾಡಿದ ಎಂಬರ್ಥವೂ ಇದೆ ("ಒಂದಿದಳಂಕೃತಿ ಕೈತ ದೇಸಿ" – 'ಪಂಪಭಾರತ').

ಮಾಡು ಎಂಬರ್ಥದಲ್ಲಿ ಗೆಯ್ ಎಂಬ ರೂಪವೂ ವ್ಯಾಪಕವಾಗಿ ಬಳಕೆಯಲ್ಲಿದೆ."ಗೆಯ್ (ಕೆಯ್) – ಶಿಲ್ಪೇ" ಎಂದು 'ಶಬ್ದಮಣಿದರ್ಪಣ' ಹೇಳುತ್ತದೆ.ಗೆಯ್ ಅನ್ನು ಗೈ ಎಂದೂ ಬರೆಯುವುದು ರೂಢಿ.ಇದು ಗೇ ಎಂದೂ ಬಳಕೆಯಲ್ಲಿದೆ. 'ಗೇದೂ ಗೇದೂ ಸಾಕಾಗದೆ' ಎಂಬಂತಹ ಮಾತು ಸಾಮಾನ್ಯ. ಇದರ ನಾಮರೂಪಗಳಾದ ಗೆಯ್ತ ("ಈ ಮನುಜರ ಗೆಯ್ತುಮಂ ಬಿಸುಟು" – 'ಕರ್ಣಾಟಕ ಕಾದಂಬರಿ') ಅಥವಾ ಗೆಯ್ಮೆ ಅಥವಾ ಗೇಮೆ ಕೆಲಸ ಎಂಬರ್ಥವನ್ನು ಪಡೆಯುತ್ತವೆ. ಗೆಯ್ವೊಗ ಎಂಬ ರೂಪವು ಕಾರ್ಯವೈಖರಿ ಎಂಬರ್ಥದಲ್ಲಿ ಪೊನ್ನನ 'ಶಾಂತಿಪುರಾಣ'ದಲ್ಲಿ ಬಳಕೆಯಾಗಿದೆ ("ಬಗೆ ಮತ್ತೊಂದೆನೆಯುಂ ಗೆಯ್ವೊಗಂ ಇತ್ತೊಂದೆನೆಯುಂ").

=====

## ದಿ॥ ವಿ ನಾಗರಾಜರಾವ್ ಮಾಧ್ಯಮ ಪ್ರಶಸ್ತಿ ಸ್ಥಾಪನೆ



ಆಕಾಶವಾಣಿ ಹಾಗೂ ದೂರ ದರ್ಶನದಲ್ಲಿ ಸುದ್ದಿ ಸಂಪಾದಕರಾಗಿ ಸೇವೆ ಸಲ್ಲಿಸಿ ನಿವೃತ್ತರಾಗಿದ್ದ ವಿ.ನಾಗರಾಜ ರಾವ್ ಅವರು ಕಡೆಯವರೆಗೂ ಕ್ರಿಯಶೀಲರಾಗಿದ್ದು, 16–2–2015 ರಂದು ತಮ್ಮ 92ನೆಯ ವಯಸ್ಸಿನಲ್ಲಿ ಕೀರ್ತಿಶೇಷರಾಗಿರುತ್ತಾರೆ. ಪತ್ರಿಕಾರಂಗ ಹಾಗು ಮಾಧ್ಯಮ ಕ್ಷೇತ್ರಕ್ಕೆ ಗಣನೀಯ ಸೇವೆ ಸಲ್ಲಿಸಿ (Journalism & Broadcasting) ಸಾಹಿತ್ಯ ಪ್ರಪಂಚದಲ್ಲೂ ಮನ್ನಣೆಗಳಿಸಿದ್ದ ಶ್ರೀ ವಿ.ನಾಗರಾಜರಾವ್ ಅವರಿಗೆ ಕರ್ನಾಟಕ ಪತ್ರಿಕಾ ಅಕಾಡೆಮಿ, ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ ಪ್ರಶಸ್ತಿಗಳು ಸೇರಿದಂತೆ ಹಲವಾರು ಗೌರವ–ಪುರಸ್ಕಾರಗಳು ಸಂದಿವೆ. ಶ್ರೀ ವಿ.ನಾಗರಾಜರಾವ್ ಅವರ ಹೆಸರಿನಲ್ಲಿ, ಪತ್ರಿಕಾರಂಗ/ಮಾಧ್ಯಮ ಕ್ಷೇತ್ರಕ್ಕೆ ಸೀಮಿತವಾಗಿರುವಂತೆ ಪ್ರಶಸ್ತಿಯೊಂದನ್ನು ಸ್ಥಾಪಿಸುವ ಅಪೇಕ್ಷೆಯಿಂದ ಅವರ ಪುತ್ರಿ ಶ್ರೀಮತಿ ರಾಜೇಶ್ವರಿ ಕೃಷ್ಣ ಅವರು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನಕ್ಕೆ ಮುದುವಟ್ಟು ನೀಡಿ ಪತ್ರಿಕಾರಂಗ/ಮಾಧ್ಯಮಕ್ಷೇತ್ರಕ್ಕೆ ಸೀಮಿತವಾಗಿರುವಂತೆ ಪ್ರಶಸ್ತಿಯೊಂದನ್ನು ಸ್ಥಾಪಿಸಿರುತ್ತಾರೆ. ಈ ಪ್ರಶಸ್ತಿಗೆ ಸಂಬಧಿಸಿದಂತೆ ಕೆಲವು ವಿವರಗಳು ಇಂತಿವೆ.

**ಪ್ರಶಸ್ತಿಯ ಹೆಸರು :** ಶ್ರೀ ವಿ.ನಾಗರಾಜರಾವ್ ಸಮೂಹ ಮಾಧ್ಯಮ ಪ್ರಶಸ್ತಿ.

**ಪ್ರಶಸ್ತಿಯ ಉದ್ದೇಶ:** ಪತ್ರಿಕಾರಂಗ ಹಾಗು ಮಾಧ್ಯಮಕ್ಷೇತ್ರಕ್ಕೆ ನೀಡಿರುವ ಶ್ರೇಷ್ಠ ಸಮಗ್ರ ಕೊಡುಗೆಯನ್ನು ಪರಿಗಣಿಸಿ ನೀಡುವ "ಜೀವಮಾನ ಸಾಧನೆ"ಯ ಪ್ರಶಸ್ತಿಯಾಗಿರುತ್ತದೆ.

**ಪ್ರಶಸ್ತಿಯ ಮೊತ್ತ :** ಹತ್ತು ಸಾವಿರ ರೂಪಾಯಿಗಳು ಜೊತೆಗೆ ಒಂದು ಫಲಕ/citation.

**ಪ್ರಶಸ್ತಿಯ ಆಯೋಜನೆ :** ವಾರ್ಷಿಕ ಪ್ರಶಸ್ತಿ– ಮುಂದಿನ ವರ್ಷದಿಂದ ಪ್ರತಿವರ್ಷ ಫೆಬ್ರವರಿ ತಿಂಗಳಲ್ಲಿ ಈ ಪ್ರಶಸ್ತಿ ನೀಡಲಾಗುವುದು

### ಶ್ರೀ ವಿ. ನಾಗರಾಜರಾವ್ ಸಮೂಹ ಮಾಧ್ಯಮ ಪ್ರಶಸ್ತಿ–2017

**ಪ್ರಶಸ್ತಿ ವಿಜೇತರು : ಶ್ರೀ ವಸಂತ ನಾಡಿಗೇರ, ಹಿರಿಯ ಪತ್ರಕರ್ತರು**

**ಆಯ್ಕೆ ಸಮಿತಿಯ ಅಭಿಪ್ರಾಯ :** ಸಂಯುಕ್ತ ಕರ್ನಾಟಕ, ಕನ್ನಡಪ್ರಭ ಮತ್ತು ವಿಜಯಕರ್ನಾಟಕ ದಿನಪತ್ರಿಕೆಗಳಲ್ಲಿ ಮೂರು ದಶಕಗಳ ಕಾಲ ಸೇವೆ ಸಲ್ಲಿಸಿರುವ ಶ್ರೀ ವಸಂತ ನಾಡಿಗೇರ ಅವರದು ಸದ್ದಿಲ್ಲದ ಸಾಧನೆ. ದಿನವೂ ನಿಜವಾದ ಸುದ್ದಿಗಳೊಂದಿಗೆ ಗುದ್ದಾಡುತ್ತ, ಒಂದು ಪತ್ರಿಕೆಯನ್ನು ರೂಪಿಸುವಲ್ಲಿ ಡೆಸ್ಕ್‌ನಲ್ಲಿ ಕೆಲಸ ಮಾಡುವ ಪತ್ರಕರ್ತರ ಶ್ರಮ ಮತ್ತು ಒಳನೋಟ ಅಮೂಲ್ಯವಾದದು. ಶ್ರೀ ವಸಂತ ನಾಡಿಗೇರ ಅವರು ಹೀಗೆ ಸಾರ್ವಜನಿಕವಾಗಿ ಎಲ್ಲೂ ಕಾಣಿಸಿಕೊಳ್ಳದೆ, ನೇಪಥ್ಯದಲ್ಲಿ ಇದ್ದುಕೊಂಡೇ ಕನ್ನಡ ಪತ್ರಿಕೋದ್ಯಮದಲ್ಲಿ ಹೊಸ ದನಿ, ಹೊಸ ಭಾಷೆ, ಹೊಸ ದೃಷ್ಟಿಕೋನ ಇವೆಲ್ಲವೂ ಕಾಣಿಸುವಂತೆ/ ಕೇಳಿಸುವಂತೆ ಮಾಡಿರುವ ನಿಜವಾದ ಸಾಧಕರಾಗಿದ್ದಾರೆ.

ಸುದ್ದಿ ಬರೆಯುವುದೆಂದರೆ ಅದೇನೂ ಸರಳವಾದ ಕೆಲಸವಲ್ಲ. ಇಂದಿನ ಆಧುನಿಕ ಯುಗಕ್ಕೆ ಬೇಕಾದ ಸಂಕ್ಷಿಪ್ತತೆ, ವ್ರತದಂತೆ ಆಚರಿಸಿಕೊಂಡು ಬಂದಿರುವವರು ಶ್ರೀವಸಂತ ನಾಡಿಗೇರರು. ಇದರ ಜೊತೆಗೆ ಓದುಗರ ಮನಸ್ಸನ್ನು ಥಟ್ಟನೆ ಸೆಳೆಯುವಂತಹ ಶೀಷಿಕೆಗಳನ್ನು ಕೊಡುವುದು ಇವರಿಗೆ ಕರತಾಲಮಲಕ. ಪತ್ರಕರ್ತನೊಬ್ಬನಿಗೆ ಇರಬೇಕಾದ 'ಪದಗಳ ಜತೆ ಆಟವಾಡುವ' ಸಾಮರ್ಥ್ಯ/ ಕೌಶಲ್ಯಕ್ಕೆ ಕೂಡ ಇವರು ಹೆಸರಾಗಿದ್ದಾರೆ.

ಒಬ್ಬ ಓದುಗನಿಗೆ ಯಾವ ಬಗೆಯ/ ಎಷ್ಟೊಂದು ಬಗೆಯ ಕುತೂಹಲಗಳಿರುತ್ತವೆ ಎನ್ನುವುದನ್ನು ನಿಖರವಾಗಿ ಕಂಡುಕೊಂಡು, ಪತ್ರಿಕೆಯಲ್ಲಿ ಅಂಥದೆಲ್ಲವೂ ಇರಬೇಕು ಎನ್ನುವ ತತ್ವದಲ್ಲಿ ನಂಬಿಕೆ ಇಟ್ಟುಕೊಂಡಿರುವವರು ಇವರು. ಪತ್ರಿಕೋದ್ಯಮವು ವಿಪರೀತವಾದ ಗಾಂಭೀರ್ಯದ ಹೊರೆಯಲ್ಲಿ ನರಳಬಾರದು ಎಂದು ಪ್ರತಿಪಾದಿಸುವ ಶ್ರೀ ವಸಂತ ನಾಡಿಗೇರರು, ಓದುಗರಿಗೆ ಕೊಡುವ ಹಲವು ಸಂಗತಿಗಳು ಲವಲವಿಕೆಯ ಅಂಶವನ್ನು ಒಳಗೊಂಡಿರಬೇಕು ಎಂದುಕೊಂಡು ಅದಕ್ಕೆ ತಕ್ಕಂತೆ ತಾವು ಕೆಲಸ ಮಾಡಿದ ಪತ್ರಿಕೆಗಳಲ್ಲಿ ಹಲವು ಹೆಜ್ಜೆಗುರುತುಗಳನ್ನು ಮೂಡಿಸಿದ್ದಾರೆ. ಇವುಗಳ ಜತೆಗೆ, ಖ್ಯಾತ ಗಾಯಕಿ ಲತಾ ಮಂಗೇಶ್ಕರ್ ಅವರನ್ನು ಕುರಿತು ಗಮನಾರ್ಹವಾದ ಪುಸ್ತಕವನ್ನೂ ಬರೆದಿದ್ದಾರೆ.

ಒಬ್ಬ ನಿಜವಾದ ಪತ್ರಕರ್ತನಿಗೆ ಇರಬೇಕಾದ ಪ್ರಾಮಾಣಿಕತೆ, ಔದಾರ್ಯ ಮತ್ತು ಸಮುದಾಯಿಕ ಪ್ರಜ್ಞೆಗಳು ಕೂಡ ಶ್ರೀ ವಸಂತ ನಾಡಿಗೇರರ ವ್ಯಕ್ತಿತ್ವದಲ್ಲಿದ್ದ ಏಕ ಧ್ವನಿಯನ್ನು ಮುರಿದು, ಹಲವು ಬಗೆಯ ಹೊಸ ಧ್ವನಿಗಳು/ ಹೊಸ ಬಗೆಯ ಸುದ್ದಿಗಳು ಮತ್ತು ವಿಶ್ಲೇಷಣೆಗಳು– ಇವೆಲ್ಲವನ್ನೂ ಮುಂಚೂಣಿಗೆ ತರುವಲ್ಲಿ ಶ್ರೀ ವಸಂತ ನಾಡಿಗೇರ ಅವರು ವಹಿಸಿರುವ ಪಾತ್ರವು ಅತ್ಯಂತ ಮೌಲಿಕವಾದುದಾಗಿದೆ.

1. ಬಿ.ಎಸ್. ಜಯಪ್ರಕಾಶ ನಾರಾಯಣ
2. ಡಾ. ಟಿ.ಎನ್. ವಾಸುದೇವಮೂರ್ತಿ
3. ಗುಡಿಹಳ್ಳಿ ನಾಗರಾಜ

---

5ನೇ ಪುಟದಿಂದ

## ಪ್ರೊ. ಎಲ್. ಎಸ್. ಶೇಷಗಿರಿರಾವ್ ಪ್ರಶಸ್ತಿ



20–04–2017 ರಂದು ಪ್ರಖ್ಯಾತ ಸಾಹಿತಿ ಹಾಗೂ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಹಿಂದಿನ ಅಧ್ಯಕ್ಷರಾಗಿದ್ದ ಪ್ರೊ.ಎಲ್. ಎಸ್. ಶೇಷಗಿರಿರಾವ್ ಅವರು ಸ್ಥಾಪಿಸಿರುವ ಪ್ರೊ. ಎಲ್. ಎಸ್. ಶೇಷಗಿರಿರಾವ್ ದತ್ತಿ ಪ್ರಥಮ ಪ್ರಶಸ್ತಿಯನ್ನು ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರು ಹಾಗೂ ಖ್ಯಾತ ಸಾಹಿತಿ ಡಾ॥ ಎಸ್.ಜಿ. ಸಿದ್ದರಾಮಯ್ಯ ಅವರು ಕನ್ನಡ ಸಾಹಿತ್ಯಕ್ಕೆ ಮತ್ತು ವಿಮರ್ಶಾ ಕ್ಷೇತ್ರಕ್ಕೆ ನೀಡಿರುವ ಗಣನೀಯ ಸೇವೆಯನ್ನು ನೀಡಿರುವ ಡಾ॥ ಜಿ.ಆರ್. ತಿಪ್ಪೇಸ್ವಾಮಿ ಅವರಿಗೆ ಪ್ರದಾನ ಮಾಡಿ ಗೌರವಿಸಿದರು. ಈ ಪ್ರಶಸ್ತಿಯು ನಗದು ಹತ್ತು ಸಾವಿರ ರೂಪಾಯಿಗಳನ್ನೊಳಗೊಂಡಿದೆ.

ಡಾ॥ ಎಲ್.ಎಸ್. ಶೇಷಗಿರಿ ರಾವ್ ಹಾಗೂ ಭಾರತೀ ಶೇಷಗಿರಿರಾವ್ ಅವರ ಸಂದೇಶವನ್ನು ಶ್ರೀಮತಿ ಭಾರತಿ ಶೇಷಗಿರಿರಾವ್ ಅವರು ಸಭೆಗೆ ಓದಿ ಹೇಳಿದರು.

ಪ್ರಾರಂಭದಲ್ಲಿ ಡಾ॥ ಪಿ.ವಿ. ನಾರಾಯಣ ಅವರು ಪ್ರಸ್ತಾವಿಕ ನುಡಿಗಳನ್ನು ಆಡಿದರು. ಪ್ರೊ॥ ಅಬ್ದುಲ್ ಬಷೀರ್ ಅವರು ಡಾ॥ ಜಿ.ಆರ್. ತಿಪ್ಪೇಸ್ವಾಮಿಯವರನ್ನು ಪರಿಚಯಿಸಿದರು. ಕಾರ್ಯಕ್ರಮದ ಅಂತ್ಯದಲ್ಲಿ ರವೀಂದ್ರನಾಥ್ ಅವರು ವಂದನಾರ್ಪಣೆ ಸಲ್ಲಿಸಿದರು.

## ಅಭಿನಂದನೆಗಳು

### ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಗೌರವ ಅಧ್ಯಕ್ಷರು ಹಾಗೂ ಪ್ರಸಿದ್ಧ ವಿದ್ವಾಂಸರೂ ಆದ ಪ್ರೊ.ಎಂ. ಹೆಚ್. ಕೃಷ್ಣಯ್ಯ ಅವರಿಗೆ ಕೆಂಪೇಗೌಡ ಪ್ರಶಸ್ತಿ



ಪ್ರೊ.ಎಂ.ಎಚ್. ಕೃಷ್ಣಯ್ಯ ಪ್ರಸಿದ್ಧ ಸಾಹಿತ್ಯ ಮತ್ತು ಕಲಾ ವಿಮರ್ಶಕರಾಗಿ, ಕಲಾ ಪೋಷಕರಾಗಿ, ಕನ್ನಡ ಸಾಹಿತ್ಯ ಅಕಾಡೆಮಿ ಒಳಗೊಂಡಂತೆ ಹಲವಾರು ಸಂಸ್ಥೆಗಳ ಕಾರ್ಯನಿರ್ವಾಹಕರಾಗಿ ಮಹತ್ವದ ಸೇವೆ ಸಲ್ಲಿಸಿದವರಾಗಿದ್ದಾರೆ.

ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ನಾಡಪ್ರಭು ಕೆಂಪೇಗೌಡ ಅವರ ಜನ್ಮದಿನಾಚರಣೆ ಅಂಗವಾಗಿ ಪ್ರತಿವರ್ಷ ವಿವಿಧ ಕ್ಷೇತ್ರದ ಸಾಧಕರಿಗೆ ಪ್ರಶಸ್ತಿ ಪ್ರದಾನ ಮಾಡುತ್ತಿದೆ. 2017ನೇ ಸಾಲಿನ ಪ್ರಶಸ್ತಿಯನ್ನು ಬಿಬಿಎಂಪಿ.ಕಚೇರಿ ಆವರಣದಲ್ಲಿರುವ ಗಾಜಿನ ಮನೆಯ ಡಾ.ರಾಜ್ ಕುಮಾರ್ ಸಭಾಂಗಣದಲ್ಲಿ ಮಂಗಳವಾರ ಮಾಡಲಾಯಿತು. ಮುಖ್ಯಮಂತ್ರಿ ಸಿದ್ಧರಾಮಯ್ಯ, ಬೆಂಗಳೂರು ನಗರಾಭಿವೃದ್ಧಿ ಸಚಿವ ಕೆ.ಜೆ.ಜಾರ್ಜ್, ಇಂಧನ ಸಚಿವ ಡಿ.ಕೆ. ಶಿವಕುಮಾರ್ ಮತ್ತು ಬಿಬಿಎಂಪಿ ಮೇಯರ್ ಪದ್ಮಾವತಿಯವರು ಪ್ರಶಸ್ತಿ ಪ್ರದಾನ ಮಾಡಿದರು.ಪ್ರಶಸ್ತಿಯು ಫಲಕ, ಸನ್ಮಾನ ಪತ್ರ ಮತ್ತು 25,000 ಗೌರವಧನವನ್ನು ಒಳಗೊಂಡಿದೆ.ವಿವಿಧ ಕ್ಷೇತ್ರದಲ್ಲಿ ಸಾಧನೆ ಮಾಡಿದ ಹಲವರಿಗೆ ಈ ಬಾರಿ ಕೆಂಪೇಗೌಡ ಪ್ರಶಸ್ತಿಗೆ ಪ್ರದಾನ ಮಾಡಲಾಯಿತು.

**ಪ್ರೊ. ಎಂ.ಎಚ್.ಕೃಷ್ಣಯ್ಯ ಅವರಿಗೆ ಹೊಂಗನಸು ಬಳಗದಿಂದ ಅಭಿನಂದನೆಗಳು.**

**HONGANASU KANNADA MONTHLY**
**RNI No. KAR/KAN/2015/64049**
**REGISTERED**
**Post office Registration No.RNP/KA/BGS/2229/2015-2017**
**Office of Posting: Bangalore PSO, Bangalore 560026**
**Price :Annual Subscription Rs. 20/-**
**Date of publishing and Posting : 30-04-2017**

## ೨೦೧೭ ಏಪ್ರಿಲ್ ತಿಂಗಳಿನಲ್ಲಿ ಹಸ್ತಪ್ರತಿ ವಿಭಾಗದಲ್ಲಿ ಕೈಗೊಂಡ ಕಾರ್ಯಗಳ ವರದಿ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಹಸ್ತಪ್ರತಿ ವಿಭಾಗದಲ್ಲಿ ವಿವಿಧ ಹಂತದ ಸಂರಕ್ಷರಣಾ ಕಾರ್ಯವು ನಡೆಯುತ್ತಿದೆ. ೨೦೧೭ರ ಏಪ್ರಿಲ್ ತಿಂಗಳಿನಲ್ಲಿ ೮ ಗ್ರಂಥಗಳ ಶುಷ್ಕ ಶುದ್ಧೀಕರಣ, ೨ ಗ್ರಂಥಗಳಿಗೆ ತೈಲ/ಮಸಿ ಲೇಪನ ಕಾರ್ಯ, ೪ ಗ್ರಂಥಗಳಲ್ಲಿ ಪತ್ರಗಳ ಮರುಜೋಡಣೆ ಕಾರ್ಯ, ೮ ಗ್ರಂಥಗಳಿಗೆ ಅಟ್ಟೆಕಟ್ಟಿದ ಕಾರ್ಯ, ೮ ಗ್ರಂಥಗಳಿಗೆ ಬಟ್ಟೆ ಕಟ್ಟುವಿಕೆ ಕಾರ್ಯ , ಮತ್ತು ೪ ಗ್ರಂಥಗಳಿಗೆ ಸೂಚಿಯನ್ನು ತಯಾರಿಸಿದೆ. ೪೦೦ ಪುಟಗಳನ್ನು ಸ್ಕ್ಯಾನ್ ಮಾಡಲಾಗಿದೆ.

## ಅಕ್ಕರಗೊಟ್ಟಿ ಪದ್ಯ

ಇದು ವಿಜಯಾರ್ಧಮೆನ್ನ ಪೆಸರುಂ ವಿಜಯಾರ್ಧಮಲಂಘ್ಯಮೆಂದುಮಿಂ
ತಿದು ಪೆಱರ್ಗಾನುಮಿನ್ನೆಗಮಲಂಘ್ಯನೆನಿಂ ನಿನಗಾಳೆನಾಳ ಲೆ
ಕ್ಕದೊಳಿದು ಚಕ್ರವರ್ತಿಗಳ ದಿಗ್ವಿಜಯಾರ್ಧದೊಳೊಂದಿ ನಿಂದುದ
ಪ್ಪುದಿದಱಿಕೊಳೆ ಸಂದುದೀ ಗಿರಿಯುಮೀ ಜಗದೊಳ್
ವಿಜಯಾರ್ಧನಾಮದಿಂ

ಆದಿಪುರಾಣ, 13. 15

### ಕರ್ನಾಟಕ ಲೋಚನ

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಪ್ರಕಟಿಸುವ ಷಾಣ್ಮಾಸಿಕ ವಿದ್ವತ್ ಪತ್ರಿಕೆ ಕರ್ನಾಟಕ ಲೋಚನ ಪತ್ರಿಕೆಗೆ ಸಾಹಿತ್ಯ–ಸಂಸ್ಕೃತಿಗೆ ಸಂಬಂಧಿಸಿದ ವಿಮರ್ಶಾತ್ಮಕ/ಸಂಶೋಧನಾತ್ಮಕ ಲೇಖನಗಳನ್ನು ವಿದ್ವಾಂಸರಿಂದ ಆಹ್ವಾನಿಸಿದೆ. ಲೇಖಕರು ತಮ್ಮ ಲೇಖನಗಳನ್ನು ಹಸ್ತಪ್ರತಿ ಅಥವಾ ಬೆರಳಚ್ಚು ರೂಪದಲ್ಲಿ ಪ್ರತಿಷ್ಠಾನದ ವಿಳಾಸಕ್ಕೆ ರವಾನಿಸಬಹುದು ಅಥವಾ bmsrilochana@gmail.comಗೆ ಈ ಮೈಲ್ ಮೂಲಕ ರವಾನಿಸಬಹುದು.

**Printed and published by** : B.R.Ravindranath on behalf of the BMSRI SMARAKA PRATISHTANA, 3rd Main Road, NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10. and published at BMSRI SMARAKA PRATISHTANA, 3rd Main Road, NR Colony, Bangalore - 560019 Editor : B.R.Ravindranath

**ಅಚ್ಚಾದ ಪುಸ್ತಕ** ತೆರೆದ–ಅಂಚೆ

ಶ್ರೀಮತಿ/ಶ್ರೀ..........................................................................................

..........................................................................................

..........................................................................................

ವಿಳಾಸ
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೨೬೬೧೫೮೭೭